ಡಾ॥ ಎನ್.ಹವಳಯ್ಯ *

# ಬಾದಾಮಿ ಚಲುಕ್ಯರ ಎರಡು ಹೊಸ ನಾಣ್ಯಗಳು

ಬಾದಾಮಿ ಚಲುಕ್ಯರ ನಾಣ್ಯಗಳು ಹೆಚ್ಚಿನ ಸಂಖ್ಯೆಯಲ್ಲಿ ಪತ್ತೆಯಾಗಿಲ್ಲವೆಂಬುದು ಇತಿಹಾಸಕಾರರಿಗೆ ತಿಳಿದಿರುವ ವಿಷಯ. ಪ್ರೊಫೆಸರ್ ಎ. ವಿ. ನರಸಿಂಹ ಮೂರ್ತಿಯವರು ಇಮ್ಮಡಿ ವಿಕ್ರಮಾದಿತ್ಯನಿಗೆ ಸೇರಿದ ಚಿನ್ನದ ನಾಣ್ಯಗಳನ್ನು ತಮ್ಮ ಗ್ರಂಥದಲ್ಲಿ ವರದಿ ಮಾಡಿದ್ದಾರೆ[1]. ಇತರ ರಾಜರ ನಾಣ್ಯಗಳು ದೊರೆತಿಲ್ಲವೆಂದು ತಿಳಿಸಿದ್ದಾರೆ. ಆದರೆ ಇತ್ತೀಚೆಗೆ ಎರಡು ಗಮನಾರ್ಹ ತಾಮ್ರದ ನಾಣ್ಯಗಳು ಬೆಳಕಿಗೆ ಬಂದಿವೆ. ಅವುಗಳನ್ನು ಇತಿಹಾಸಕಾರರ ಗಮನಕ್ಕೆ ತರುವುದೇ ಮುಖ್ಯ ಉದ್ದೇಶ.

ಮೊದಲನೆಯದಾಗಿ ಪ್ರಖ್ಯಾತ ಗುಹಾ ದೇವಾಲಯವಾದ ಎಲಿಫಾಂಟಾದಲ್ಲಿ ಕೆಲವು ತಾಮ್ರದ ನಾಣ್ಯಗಳು ಪತ್ತೆಯಾದವು.[2] ಇವುಗಳ ವಿವರ ಹೀಗಿದೆ: ಇದೊಂದು ಆಯತಾಕಾರದ ತಾಮ್ರದ ನಾಣ್ಯವಾಗಿದ್ದು ಮುಮ್ಮುಖದಲ್ಲಿ ಆರನೆಯ ಶತಮಾನದ ಪ್ರಾಚೀನ ಕನ್ನಡ ಲಿಪಿಯ ಎರಡು ಸಾಲಿನ ಬರಹವಿದೆ. ಈ ಬರಹವು ಶ್ರೀ ಸತ್ಯಾಶ್ರಯ ಎಂದಿದೆ. ಈ ನಾಣ್ಯಗಳು ಎಲಿಫಾಂಟಾದ ಬೌದ್ಧ ಸಂಸ್ಕೃತಿಯ ಅವಶೇಷಗಳಲ್ಲಿ ಪತ್ತೆಯಾಗಿವೆ. ಸತ್ಯಾಶ್ರಯ ಎಂಬುದು ಚಲುಕ್ಯರಲ್ಲಿ ಒಂದು ಸಾಮಾನ್ಯವಾದ ಬಿರುದಾಗಿದ್ದು ಒಂದನೇ ಪುಲಿಕೇಶಿ, ಮಂಗಳೇಶ ಮತ್ತು ಎರಡನೇ ಪುಲಿಕೇಶಿ ರಾಜರು ಈ ಬಿರುದನ್ನು ಹೊಂದಿದ್ದರು. ಹೀಗಾಗಿ ಈ ನಾಣ್ಯವನ್ನು ಈ ಮೂವರಲ್ಲಿ ಯಾರಿಗಾದರೊಬ್ಬರಿಗೆ ಅನ್ವಯಿಸಬಹುದು. ಆದರೆ ಈ ನಾಣ್ಯ ದೊರಕಿರುವುದು ಎಲಿಫಾಂಟಾದಲ್ಲಿ. ಇದು ಮುಖ್ಯವಾದ ಅಂಶವಾಗಿ ಪರಿಗಣಿಸಿರುವುದರಿಂದ ಇದನ್ನು ಎರಡನೇ ಪುಲಿಕೇಶಿಗೆ ಸೇರಿದ್ದೆಂದು ಹೇಳಬಹುದಾಗಿದೆ. ಕ್ರಿಸ್ತಶಕೆಯ ಪ್ರಾರಂಭದ ಶತಮಾನಗಳ ಶಾಸನಗಳಲ್ಲಿ ಎಲಿಫಾಂಟಾವನ್ನು 'ಪುರಿ' ಅಥವಾ ಘಾರಾಪುರಿ ಎಂದು ಉಲ್ಲೇಖಿಸಲಾಗಿದೆ. ಎರಡನೇ ಪುಲಿಕೇಶಿಯ ಐಹೊಳೆಯ ಶಾಸನದಲ್ಲಿ ಈ ರಾಜನು ಕೊಂಕಣದ ಮೌರ್ಯರನ್ನು ಸೋಲಿಸಿ ಪುರಿಯನ್ನು ವಶಪಡಿಸಿಕೊಂಡುದ್ದಾಗಿ ಹೇಳಲಾಗಿದೆ. ನೂರಾರು ಹಡಗುಗಳು ಸಂಚರಿಸಬಹುದಾಗಿದ್ದ ಈ ಪುರಿಯನ್ನು ಪಶ್ಚಿಮ ಸಾಗರದ ಸೌಭಾಗ್ಯವೆಂದು ವರ್ಣಿಸಲಾಗಿದೆ. ಈ ವರ್ಣನೆಯಿಂದ ನಮಗೆ ಸ್ಪಷ್ಟವಾಗಿ ತಿಳಿಯುವುದೇನೆಂದರೆ ಪುರಿಯು ಮಹಾರಾಷ್ಟ್ರದ ಕರಾವಳಿಯಲ್ಲಿತ್ತು ಎಂದು. ಈ ರೇವು ಪಟ್ಟಣವನ್ನು ಎಲಿಫಾಂಟಾ ಎಂದು ಗುರುತಿಸಲಾಗಿದೆ.[3] ಹಾಗೆಂದರೆ ಎರಡನೇ ಪುಲಿಕೇಶಿಯು ಕೊಂಕಣದ ಮೌರ್ಯರನ್ನು ಸೋಲಿಸಿ ಪುರಿ ಅಥವಾ ಎಲಿಫಾಂಟಾ ದ್ವೀಪವನ್ನು ವಶಪಡಿಸಿಕೊಂಡನು. ಪ್ರಸ್ತಾಪಿತ ನಾಣ್ಯವು ಎಲಿಫಾಂಟಾದಲ್ಲಿ ದೊರೆತಿರುವುದರಿಂದ ಈ ದ್ವೀಪಕ್ಕೆ ಚಲುಕ್ಯರ ಸಂಪರ್ಕ ಎರಡನೇ ಪುಲಿಕೇಶಿಯ ಕಾಲದಲ್ಲಿ ಮಾತ್ರವೇ ಇತ್ತೆಂದು ಸ್ಪಷ್ಟವಾಗಿ ತಿಳಿದುಬರುತ್ತದೆ. ಸತ್ಯಾಶ್ರಯ ಎಂಬ ಬಿರುದನ್ನು ಹೊಂದಿದ್ದ ಬೇರೆ ರಾಜರುಗಳಾದ ಒಂದನೇ ಪುಲಿಕೇಶಿ ಮತ್ತು ಮಂಗಳೇಶರ ವ್ಯಾಪ್ತಿ ಎಲಿಫಾಂಟಾದವರೆಗೆ ಹರಡಿರಲ್ಲಿಲ್ಲವಾದ್ದರಿಂದ ಈ ಸ್ಥಳದೊಡನೆ ಅವರಿಗೆ ಯಾವ

*ಅಧ್ಯಾಪಕ, ಪ್ರಾಚೀನ ಇತಿಹಾಸ ಮತ್ತು ಪುರಾತತ್ತ್ವ ವಿಭಾಗ, ಮಾನಸಗಂಗೋತ್ರಿ, ಮೈಸೂರು-೫೭೦೦೦೬

1. ಎ.ವಿ.ನರಸಿಂಹಮೂರ್ತಿ: ಕಾಯಿನ್ಸ್ ಆಫ್ ಕರ್ನಾಟಕ
2. ಎ.ವಿ.ನರಸಿಂಹಮೂರ್ತಿ (ಸಂ) : ಸ್ಟಡೀಸ್ ಇನ್ ಸೌತ್ ಇಂಡಿಯನ್ ಕಾಯಿನ್ಸ್, ಸಂಚಿಕೆ ೩, ಪುಟ ೮೯-೯೬
3. ಜರ್ನಲ್ ಆಫ್ ದಿ ಎಪಿಗ್ರಾಫಿಕಲ್ ಸೊಸೈಟಿ ಆಫ್ ಇಂಡಿಯಾ, ಸಂಚಿಕೆ ೧೭, ಪುಟ ೨೧

ಸಂಬಂಧವು ಇರಲಿಲ್ಲ. ಆದ್ದರಿಂದ ಈ ಸಂಬಂಧದಲ್ಲಿ ಸತ್ಯಾಶ್ರಯ ಎನ್ನುವ ಚಲುಕ್ಯ ರಾಜನು ಬೇರಾರೂ ಅಲ್ಲದೆ ಎರಡನೇ ಪುಲಕೇಶಿ ಮಾತ್ರವೇ ಎಂಬುದಾಗಿ ಹೇಳಬೇಕಾಗುತ್ತದೆ. ಹೀಗಾಗಿ ಪ್ರಸ್ತುತ ತಾಮ್ರದ ನಾಣ್ಯಗಳು ಎರಡನೇ ಪುಲಕೇಶಿಗೆ ಸೇರಿದ್ದಾಗಿತ್ತೆಂದು ಪರಿಗಣಿಸಬೇಕಾಗಿದೆ.

ಆದರೆ ಸಾಮಾನ್ಯವಾಗಿ ಎಲ್ಲರೂ ನಿರೀಕ್ಷಿಸುವಂತೆ ಇದರ ಹಿಮ್ಮುಖದಲ್ಲಿ ವರಾಹದ ಗುರುತು ಇಲ್ಲದೆ ನಂದಿಯ ಗುರುತು ಇದೆ; ಹಾಗೆಂದ ಮಾತ್ರಕ್ಕೆ ಚಲುಕ್ಯ ವಂಶದವರು ತಮ್ಮ ಲಾಂಛನವಾದ ವರಾಹದ ಬದಲಿಗೆ ನಂದಿಯ ಚಿತ್ರವಿರುವ ನಾಣ್ಯಗಳನ್ನು ಚಲಾವಣೆಗೆ ತರಬಾರದೆಂಬ ಯಾವ ನಿಯಮವೂ ಇಲ್ಲ.[4] ಬಹುಶಃ ಅವರು ವರಾಹ ಮತ್ತು ನಂದಿಯ ಚಿತ್ರವಿರುವ ನಾಣ್ಯಗಳನ್ನು ಹೊರಡಿಸಿದ್ದಿರಬಹುದು ಮತ್ತು ಚಿನ್ನದ ನಾಣ್ಯಗಳು ವರಾಹ ಲಾಂಛನವನ್ನು, ತಾಮ್ರದ ನಾಣ್ಯಗಳು ನಂದಿಯ ಚಿತ್ರವನ್ನು ಹೊಂದಿದ್ದವೆಂದು ಹೇಳಬಹುದು. ಈ ತಾಮ್ರದ ನಾಣ್ಯಗಳ ಮೇಲೆ ಕಂಡು ಬರುವ ಕನ್ನಡ ಪ್ರಾಚೀನ ಲಿಪಿಯು ಎರಡನೇ ಪುಲಕೇಶಿಯ ಕಾಲಕ್ಕೆ ಬಹುಮಟ್ಟಿಗೆ ಸರಿಹೊಂದುತ್ತದೆ. ಆದ್ದರಿಂದ ಈ ತಾಮ್ರದ ನಾಣ್ಯಗಳನ್ನು ಎರಡನೇ ಪುಲಕೇಶಿಯು ಹೊರಡಿಸಿದ್ದಾಗಿ ಊಹಿಸಬಹುದಾಗಿದೆ. ಇಂತಹ ಮೂರು ನಾಣ್ಯಗಳು ಎಲಿಫಾಂಟಾದ ಶೇಖರಣೆಯ ರಾಶಿಯಲ್ಲಿ ಪತ್ತೆಯಾಗಿರುವುದು ಗಮನಾರ್ಹವಾಗಿದೆ.

ಈಗ ಇನ್ನೊಂದು ನಾಣ್ಯವನ್ನು ಪ್ರಸ್ತಾಪಿಸಬಹುದು. ಈ ನಾಣ್ಯವು ಸೀಸ ಮಿಶ್ರಲೋಹಕ್ಕೆ ಸೇರಿದ್ದಾಗಿದ್ದು ಅದರ ವಿವರಗಳು ಹೀಗಿವೆ.[5] ಅದೊಂದು ವೃತ್ತಾಕಾರದ ನಾಣ್ಯವಾಗಿದ್ದು ೧.೮ ಸೆಂ.ಮೀ. ವ್ಯಾಸವುಳ್ಳದ್ದಾಗಿ, ೪ ಗ್ರಾಂ ತೂಗುತ್ತದೆ. ಇದರ ಮುಮ್ಮುಖದಲ್ಲಿ ಬಲಕ್ಕೆ ಮುಖ ಮಾಡಿಕೊಂಡಿರುವ ನಂದಿಯ ಚಿತ್ರವಿದ್ದು ಹಿಮ್ಮುಖದಲ್ಲಿ ಕುಂಭ ಮತ್ತು ಎರಡು ದೀಪ ಸ್ತಂಭಗಳೂ, ಜೊತೆಗೆ ಎರಡು ಸಾಲಿನ 'ಶ್ರೀ ಕ್ರಿತರಾಜ' ಎನ್ನುವ ಕನ್ನಡ ಬರಹವಿದೆ. ಕ್ರಿತರಾಜ ಎನ್ನುವ ಈ ಬರಹವು 'ಕೀರ್ತಿರಾಜ' ಎಂಬುದನ್ನು ಸೂಚಿಸುತ್ತದೆ. ಈ ಕೀರ್ತಿರಾಜನು ಬೇರಾರೂ ಅಲ್ಲದೆ ಚಲುಕ್ಯ ವಂಶದ ಕೀರ್ತಿವರ್ಮನೇ ಎಂಬುದು ಸಂಭವನೀಯ. ಕೀರ್ತಿರಾಜ ಎನ್ನುವ ಪದವು ಚಲುಕ್ಯ ಶಾಸನಗಳಲ್ಲಿ ಕಂಡು ಬಂದಿದ್ದು, ಕ್ರಿತರಾಜ ಎನ್ನುವ ಪದವು ಚಲುಕ್ಯ ಶಾಸನಗಳಲ್ಲಿ ಕಂಡು ಬಂದಿರುವುದಿಲ್ಲ. ಆದಾಗ್ಯೂ ಕ್ರಿತರಾಜ ಎನ್ನುವ ಪದವು 'ಕೀರ್ತಿರಾಜ' ಎನ್ನುವ ಪದಕ್ಕೆ ಸಮಾನವಾಗಿಸ ಬಹುದು. ಈ ಊಹೆಯ ಆಧಾರದ ಮೇಲೆ ಈ ನಾಣ್ಯವನ್ನು ಕೀರ್ತಿವರ್ಮನ ಕಾಲಕ್ಕೆ ಸೇರಿದ್ದೆಂದು ಹೇಳಬಹುದು.

ಕೀರ್ತಿವರ್ಮ ಎಂಬ ಹೆಸರಿನ ಇಬ್ಬರು ದೊರೆಗಳಿದ್ದುದರಿಂದ ಪ್ರಸ್ತುತ ನಾಣ್ಯ ಯಾರು ಹೊರಡಿಸಿದ್ದೆಂಬುದು ಈಗ ಸಮಸ್ಯೆಯಾಗಿ ಉಳಿದಿದೆ. ಒಂದನೇ ಕೀರ್ತಿವರ್ಮನು ಚಲುಕ್ಯರ ಪ್ರಾಬಲ್ಯವನ್ನು ಬೆಳೆಸಿದವನಾಗಿದ್ದುದರಿಂದ, ಎರಡನೇ ಕೀರ್ತಿವರ್ಮನ ಬದಲಾಗಿ ಇವನೇ ಈ ನಾಣ್ಯವನ್ನು ಹೊರಡಿಸಿದವನೆಂದು ಹೇಳಬಹುದು. ಏಕೆಂದರೆ ಎರಡನೇ ಕೀರ್ತಿವರ್ಮನು ಪಲ್ಲವರ ಮತ್ತು ಇತರರ ಪ್ರಾಬಲ್ಯಕ್ಕೆ ಸಿಲುಕಿ ಅನೇಕ ಕಷ್ಟಗಳನ್ನು ಎದುರಿಸಬೇಕಾಯಿತು. ಆದರೆ ಈ ನಾಣ್ಯವೂ ಸಹ ವರಾಹದಬದಲಿಗೆ ನಂದಿಯ ಚಿತ್ರವನ್ನು ಹೊಂದಿರುವುದನ್ನು ಗಮನಿಸಬಹುದಾಗಿದೆ. ಈ ಎಲ್ಲಾ ಪರಿಶೀಲನೆಗಳಿಂದ ಈ ನಾಣ್ಯವು ನಿಗದಿತವಾಗಿ ಕೀರ್ತಿವರ್ಮನಿಗೆ ಸೇರಿದ್ದೆಂದು ತಾತ್ಕಾಲಿಕವಾಗಿ ಹೇಳಬೇಕಾಗುತ್ತದೆ.

ಈಗ ಎರಡು ರೀತಿಯ ನಾಣ್ಯಗಳನ್ನು ಗಮನಿಸಿ ಈ ರೀತಿ ತೀರ್ಮಾನಿಸಬಹುದು:

೧) ಇವೆರಡೂ ಮೊಟ್ಟ ಮೊದಲನೆಯ ಬಾದಾಮಿ ಚಲುಕ್ಯರ ತಾಮ್ರದ ನಾಣ್ಯಗಳು.

೨) ಮೊದಲನೆಯದು ಇಮ್ಮಡಿ ಪುಲಕೇಶಿಗೆ ಸೇರಿದ್ದೆಂದು, ಎಲಿಫಾಂಟಾದ ತಾಮ್ರದ ನಾಣ್ಯಗಳ ಆಧಾರದ ಮೇಲೆ ಹೇಳಬಹುದು.

೩) ಕೀರ್ತಿವರ್ಮನ ನಾಣ್ಯದಲ್ಲಿ ಖಚಿತತೆಯಿಲ್ಲದಿದ್ದರೂ, ಸಾಂದರ್ಭಿಕವಾಗಿ ಅದು ಆತನಿಗೆ ಸೇರಿದ್ದೆಂದು ಹೇಳಬೇಕಾಗುತ್ತದೆ.

೪) ಈ ನಾಣ್ಯಗಳ ಮೇಲೆ ಬಾದಾಮಿ ಚಲುಕ್ಯರ ರಾಜ ಚಿಹ್ನೆಯಾದ ವರಾಹವಿಲ್ಲದಿರುವುದು ಒಂದು ಗಮನಾರ್ಹ ಅಂಶ.

---

4. ವರಹಗಳೆಂದು ಕರೆಯಲ್ಪಡುವ ನಾಣ್ಯಗಳ ಮೇಲೆ ವರಾಹದ ಚಿತ್ರವಿಲ್ಲದೇ ಇರುವ ಹತ್ತಾರು ನಾಣ್ಯಗಳು ನಮಗೆ ತಿಳಿದಿವೆ

5. ಜರ್ನಲ್ ಆಫ್ ದಿ ನ್ಯೂಮಿಸ್‌ಮ್ಯಾಟಿಕ್ ಸೊಸೈಟಿ ಆಫ್ ಇಂಡಿಯಾ, ಸಂಚಿಕೆ ೫೦, ಪುಟ ೩೭-೩೮.